# ಬಳಕೆದಾರರ ವೇದಿಕೆ - ಹಾಗೆಂದರೇನು?

(ಹಿಂದಿನ ಸಂಚಿಕೆಯಿಂದ)

**ಅವರವರ ತಲೆಗೆ ಅವರವರ ಕೈ**

ನಿಷ್ಕ್ರಿಯತೆ ಅನೇಕರ ಪ್ರಮುಖ ಮಾನಸಿಕ ತಡೆ ಎಂದು ಮೊದಲೇ ಹೇಳಿದೆ. ಆದ್ದರಿಂದಲೇ ವೇದಿಕೆ ಯಾರ ಸೇವೆ ಮಾಡಲೂ ಉಮೇದು ಮಾಡುವುದಿಲ್ಲ. ತನ್ನ ಸಮಸ್ಯೆಯನ್ನು ನಿವಾರಿಸಿಕೊಳ್ಳಬೇಕೆಂದು ಯಾರು ಪ್ರಯತ್ನಿಸುತ್ತಾರೋ ಅವರಿಗೆ ಮಾರ್ಗದರ್ಶನ ಮಾಡವುದು, ಸಹಕಾರ ಕೊಡುವುದು ವೇದಿಕೆಯ ಕೆಲಸ. ವಾಹನದ ಲೈಸೆನ್ಸ್ ನಿಮಗೆ ಬೇಕಾಗಿದ್ದರೆ ಆರ್.ಟಿ.ಓ.ದ ದಳ್ಳಾಳಿ ಹಣ ತೆಗೆದುಕೊಂಡು ನಿಮಗೆ ಅದನ್ನು ಮಾಡಿಸಿ ಕೊಡಬಹುದು. ಇಂಥ ಸಂದರ್ಭಗಳಲ್ಲಿ ನಿಮಗೆ ಡ್ರೈವಿಂಗ್ ತಿಳಿದಿರಬೇಕಾದ್ದೂ ಅಗತ್ಯವಾಗದೆ ಇರಬಹುದು. ಆದರೆ ವೇದಿಕೆಯಮೂಲಕ ನೀವು ಹೋಗುವಿರಾದರೆ ಡ್ರೈವಿಂಗ್ ನಿಮಗೆ ತಿಳಿದಿರುವುದು ಖಂಡಿತ ಮುಖ್ಯ. ಲೈಸೆನ್ಸ್ ಪಡೆಯಲು ನೀವು ಕಾಯಬೇಕಾಗಬಹುದು. ಆದರೆ ಸರಕಾರ ಕ್ರಮಬದ್ಧವಾಗಿ ರಸೀತಿ ಕೊಟ್ಟು ಪಡೆಯುವ ಹಣಕ್ಕಿಂತ ಹೆಚ್ಚನ್ನು ನೀವು ಖರ್ಚು ಮಾಡಬೇಕಿಲ್ಲ. ಆದರೆ ನಿಮ್ಮ ಲೈಸೆನ್ಸಿಗಾಗಿ ನೀವೆ ಅರ್ಜಿ ಬರೆಯಬೇಕು; ಓಡಾಡಬೇಕು; ಕೇಳಬೇಕು. ಇವೆಲ್ಲ ತರಲೆ ಯಾರಿಗೆ ಬೇಕು ಎನ್ನುವವರ ಬಗ್ಗೆ ವೇದಿಕೆ ಅಸಹಾಯಕ.

ಅಂದರೆ ರಾಜಕಾರಣಿ ನಿಮ್ಮ ಪರವಾಗಿ ಫೋನ್ ಮಾಡಿ, ಕಾಗದ ಕೊಟ್ಟು, ನಿಮ್ಮ ಕೆಲಸ ಆಗಲು ತನ್ನ ಪ್ರಭಾವ ಉಪಯೋಗಿಸುವಂತೆ; ದಳ್ಳಾಳಿ ನಿಮ್ಮ ಪರವಾಗಿ ಆಫೀಸುಗಳಲ್ಲಿ ಲಂಚ ಕೊಟ್ಟು ಕೆಲಸ ಮಾಡಿಸಿ ಕೊಡುವಂತೆ, ವೇದಿಕೆ ಎಂದೂ ಮಾಡುವುದಿಲ್ಲ. ನೀವು ನಿಮ್ಮ ಬುದ್ಧಿಯನ್ನು ಬಳಸಬೇಕು. ನಿಮ್ಮ ಕಾಲ ಮೇಲೆ ನಿಲ್ಲಬೇಕು ಎಂದು ಅದು ತಿಳಿಯುತ್ತದೆ.

ಭ್ರಷ್ಟವೂ, ಊನವೂ ಆಗಿರುವ ವ್ಯವಸ್ಥೆಯಲ್ಲಿ ನ್ಯಾಯಬದ್ಧ ಮಾರ್ಗದಲ್ಲಿ ಕೆಲಸವಾಗುವುದು ಎಷ್ಟು ಕಷ್ಟ ಎಂಬ ಅರಿವು ವೇದಿಕೆಗಿದೆ. ಆದ್ದರಿಂದ ಅದು ಬಳಕೆದಾರನ ಹಿಂದೆ ಅವನಿಗೆ ಬೆಂಬಲವಾಗಿ ನಿಲ್ಲುತ್ತದೆ. ಮೇಲಧಿಕಾರಿಗಳಿಗೆ ದೂರು ಕೊಡುವುದು, ಪತ್ರಿಕೆಗಳಂತಹ ಸಮೂಹ ಮಾಧ್ಯಮಗಳ ಮೂಲಕ ಜನಾಭಿಪ್ರಾಯ ರೂಪಿಸುವುದು, ಸಾರ್ವಜನಿಕ ಸಭೆಗಳಲ್ಲಿ ಬಹಿರಂಗವಾಗಿ ವಿಷಯಗಳನ್ನು ಚರ್ಚಿಸುವುದು, ಸತ್ಯವನ್ನು ನೇರವೂ ನಿರ್ಭೀತವೂ ಆಗಿ ಪ್ರತಿಪಾದಿಸುವುದು, ಯಾವುದರಿಂದಲೂ ಸಮಸ್ಯೆ ಪರಿಹಾರವಾಗದಿದ್ದರೆ ನ್ಯಾಯಾಲಯದ ಮೊರೆ ಹೋಗುವುದು ಇಂಥವು ವೇದಿಕೆಯ ವಿಧಾನ.

ನಿಷ್ಕ್ರಿಯ ವ್ಯಕ್ತಿಗಳ ಬಳಿಗೆ ವೇದಿಕೆ ತಾನಾಗಿ ಹೋಗುವುದಿಲ್ಲ ಎಂದು ಮೊದಲೇ ಹೇಳಿದೆ. ಆದರೆ ಪರೋಕ್ಷವಾಗಿ ಅವರನ್ನು ಸಮಸ್ಯೆಯ ಕಡೆಗೆ ಗಮನ ಹರಿಸುವಂತೆ ವೇದಿಕೆ ಮಾಡಬಹುದು. ಊರಿನ ಮಧ್ಯೆ ಒಂದು ಹೊಂಡದಲ್ಲಿ ನೀರು ನಿಂತು, ಕೊಳೆತು, ಹುಳ ಹುಟ್ಟಿ ಜನರ ಆರೋಗ್ಯ ಕೆಡುತ್ತಿದ್ದರೂ ಜನ ಆ ಬಗ್ಗೆ ಏನೂ ಮಾಡದೆ ಸುಮ್ಮನಿದ್ದರೆ, ವೇದಿಕೆ ಪತ್ರಿಕೆಗಳ ಮೂಲಕ ಅಂಥ ಕೊಳಕಿನಿಂದಾಗುವ ಕೆಟ್ಟ ಪರಿಣಾಮಗಳ ಬಗ್ಗೆ ಪತ್ರಿಕೆಗಳಲ್ಲಿ ಲೇಖನ ಪ್ರಕಟಿಸಬಹುದು. ಆ ಕೊಳಕನ್ನು ಇಲ್ಲದಾಗಿಸುವ ಹೊಣೆ ಯಾರದು, ಪ್ರಯತ್ನ ಮಾಡಬೇಕಾದ್ದು ಯಾರು, ಹೇಗೆ ಮಾಡಬೇಕು ಎಂಬುದನ್ನೆಲ್ಲ ಸವಿವರವಾಗಿ ಚರ್ಚಿಸಬಹುದು.

**ಸಮಸ್ಯೆಗೆ ಪರಿಹಾರ ಹೇಗೆ?**

ತನ್ನ ಬಳಿಗೆ ಯಾವುದೇ ಸಮಸ್ಯೆ ಬಂದರೂ ವೇದಿಕೆ ಮೊದಲು ಅದು ಬಳಕೆದಾರ-ಪೂರೈಕೆದಾರರಿಗೆ ಸಂಬಧಪಟ್ಟದ್ದು ಹೌದೇ ಅಲ್ಲವೇ ಎಂಬುದನ್ನು ಪರೀಕ್ಷೆ ಮಾಡುತ್ತದೆ. ಅಲ್ಲವಾದರೆ ಅಂಥ ಸಮಸ್ಯೆಗಳನ್ನು ವೇದಿಕೆ ತೆಗೆದುಕೊಳ್ಳುವುದಿಲ್ಲ.

ಸಮಸ್ಯೆಯು ಫಲಿತಾಂಶ ಬದ್ಧವಿರಬೇಕು ಎಂಬುದು ವೇದಿಕೆಯ ಮತ್ತೊಂದು ನಿಯಮ. ವ್ಯಕ್ತಿಗಳ ನೈತಿಕತೆಗೆ ಸಂಬಂಧಿಸಿದ ವಿಚಾರಗಳು, ವ್ಯಭಿಚಾರ, ವರದಕ್ಷಿಣೆ, ಕುಡಿತ ಇಂಥ ಸಾಮಾಜಿಕ ಅನಿಷ್ಟಗಳ ಸಂಬಂಧವಾದ ಪ್ರಶ್ನೆಗಳನ್ನು ಅದು ಎಂದೂ ತೆಗೆದುಕೊಳ್ಳುವುದಿಲ್ಲ. 'ನೈತಿಕತೆಯ ಪುನರುತ್ಥಾನವು ವೇದಿಕೆಯ ಉದ್ದೇಶ ಖಂಡಿತವಾಗಿ ಅಲ್ಲ'.

ಬಳಕೆದಾರನ ತಪ್ಪಿನಿಂದಾಗಿ ಅಥವಾ ಭ್ರಷ್ಟತನದಿಂದಾಗಿ ಉಂಟಾದ ಸಮಸ್ಯೆಗಳನ್ನೂ ವೇದಿಕೆ ತೆಗೆದುಕೊಳ್ಳುವುದಿಲ್ಲ. ನ್ಯಾಯಬದ್ಧವಾಗಿ ಆಗಬೇಕಾದ ಕೆಲಸಗಳನ್ನು ಮಾತ್ರ ವೇದಿಕೆ ಗಮನಿಸುತ್ತದೆ.

ಹೀಗೆ ತನ್ನಲ್ಲಿಗೆ ಬಂದ ಬಳಕೆದಾರ ನಿಜವಾಗಿಯೂ ಸಮಸ್ಯೆಗೆ ಸಿಕ್ಕಿದ್ದಾನೆ ಎಂದು ಖಚಿತವಾದಾಗ ಮಾತ್ರ ವೇದಿಕೆ ಬಳಕೆದಾರನ ಬೆಂಬಲಕ್ಕೆ ಬರುತ್ತದೆ.

(ಮುಂದುವರಿಯುವುದು)

# ಬಲಿಯುತ್ತಿರುವ ರೈತಬೇಡಿಕೆ: ಸೊಪ್ಪಿನಬೆಟ್ಟ

ಮಲೆನಾಡ ರೈತರಿಗೂ ಕಾಡಿಗೂ "ಹೊಕ್ಕುಬಳ್ಳಿಯ ಸಂಬಂಧ" ಎಂದಹಾಗೆ. ಸೌದೆ, ಸೊಪ್ಪು, ದರಗು, ಮಣ್ಣು, ಉಳಿಮಣ್ಣು, ದನಕರುಗಳ ಮೇವು, ಕಡೆಗೆ ಮಳೆಗಾಗಿ ಕೂಡ—ಯಾವುದಕ್ಕೆ ಕಾಡು ಬೇಡ, ಕಾಡಿನ ಸಹಾಯ ಬೇಡ? ಸೌದೆಯಂತೂ ಬಯಲು ಸೀಮೆಯ ಮನೆಗೆ ಒಂದು ವರ್ಷಕ್ಕೆ ಸಾಲುವಷ್ಟು ಇಲ್ಲಿ ಮಳೆಗಾಲದ ೩ ತಿಂಗಳು ಬರೀ ಕಂಬಳಿ ಒಣಗಿಸಲು ಸಾಲುವುದಿಲ್ಲ. ಆದ್ದರಿಂದಲೇ ಹಿಂದೆಲ್ಲ ಹಳ್ಳಿಗಳ ಜನ ಕಾಡು ಬೆಳಸಿ ಬಳಸುತ್ತಿದ್ದರು. ಬೇಕಾಬಿಟ್ಟಿ ಕಡಿಯುತ್ತಿರಲಿಲ್ಲ. ಆದರಲ್ಲಿ ಒಂದು ಕಟ್ಟಳೆಯೇ ಇತ್ತು. ಅದೇನು ಕಾನೂನಿನಿಂದ ಆದದ್ದಲ್ಲ. ನಮ್ಮ ಸಾಮಾಜಿಕ ನಡತೆಯಲ್ಲಿ ಹೇಗೋ ಹಾಗೆ ಕಾಡಿನ ಜೊತೆ ನಡವಳಿಕೆಯಲ್ಲಿನ ಸದಾಚಾರ ಅದು.

ಆದರೆ ಜನಸಂಖ್ಯೆ ಬೆಳೆದಂತೆ ಸಹಜವಾಗಿ ಗದ್ದೆ, ತೋಟಗಳ ವ್ಯಾಪ್ತಿ ಜಾಸ್ತಿಯಾಗಿ ಕಾಡು ಕಮ್ಮಿಯಾಗುತ್ತ ಬಂದದ್ದು; ಸಮಾಜದಲ್ಲಿ ಜವಾಬ್ದಾರಿ ತಪ್ಪಿ, ಬೇಕಾಬಿಟ್ಟಿಯಾಗಿ ಕಾಡಿನ ಸರಕನ್ನು ಬಳಸುತ್ತಿರುವುದು; ಸರ್ಕಾರ, ಅದರ ಸಿಬ್ಬಂದಿ, ಪುಡಾರಿಗಳು ಹಾಗೂ ಕಾಡಿನ ಕಳ್ಳರ ಶಾಮೀಲಿನಿಂದ ಸಾವಿರಾರು ಎಕರೆ ಕಾಡು ಲೂಟಿಯಾಗಿ ಕ್ಷೇತ್ರಾರ್ಥದಲ್ಲಿ ಬಯಲಾಗುತ್ತಿರುವುದು; ಹಾಗೂ ಈ ಕಳ್ಳಕಾಕರ ಹಾವಳಿಯಿಂದ ಕಾಡು ರಕ್ಷಿಸಲೆಂದು ರಚಿಸಿದ ಕಾನೂನುಗಳು ರೈತನಿಗೇ ಕತ್ತು ಹಿಸುಕುತ್ತಿರುವುದು —ಇದೆಲ್ಲದರಿಂದಾಗಿ ಮಲೆನಾಡಿನ ರೈತರು ಇಂದು ಕಾಡಿನ ಹಾಗೂ ತಮ್ಮ ಭವಿಷ್ಯ ಕುರಿತು ಕಂಗಾಲಾಗುವಂತಾಗಿದೆ.

ಹಿಂದೆ ರೈತರ ಜಮೀನಿಗೆ ಅನುಗುಣವಾಗಿ ಪ್ರತಿ ಗ್ರಾಮದಲ್ಲೂ ಸೊಪ್ಪಿನ ಬೆಟ್ಟ ಅಂತ ಇರುತ್ತಿತ್ತು. ಅದನ್ನು ಗ್ರಾಮದ ಜಮೀನುಳ್ಳ ಎಲ್ಲ ರೈತರಿಗೂ ಹಂಚಿ ಅದಕ್ಕೆ ಬಾಂದು ಸಹ ಇರುತ್ತಿತ್ತು. ಇದಕ್ಕೆ ಹಾಡ್ಯ ಎಂದು ಹೆಸರು. ಸೊಪ್ಪಿಗೇ ಬೇರೆ

**ವಿಶೇಷ ಲೇಖನ**

ಹಾಡ್ಯ, ದರಗು-ಸೌದೆಗಳಿಗೇ ಬೇರೆ ಹಾಡ್ಯ ಇರುತ್ತಿತ್ತು. ಆಗ ರೈತರು ಅದನ್ನು ಉತ್ತಮವಾಗಿ ಬೆಳೆಸಿಕೊಂಡು ಜಮೀನಿನ ಆರೈಕೆ ಕ್ರಮವಾಗಿ ಮಾಡುವುದು ಸಾಧ್ಯವಿತ್ತು.

ಈಗ ಹಾಡ್ಯಗಳು ಕಣ್ಮರೆಯಾಗುತ್ತಿವೆ. ರೈತನ ಜಮೀನಿನ ಹೊರತು ಉಳಿದೆಲ್ಲ ಸರ್ಕಾರದ್ದು. ಮನೆಯ ಸುತ್ತ ಮುತ್ತ ರೈತನೇ ಹಾಡ್ಯ ಬೆಳೆಸಿಕೊಂಡರೂ ಅದರ ಮೇಲೆ ಆತನಿಗೆ ಹಕ್ಕು ಇರುವುದಿಲ್ಲವಾಗಿ, ಯಾರಾದರೂ ಬಲವಂತವಾಗಿ ಕಡಿದುಕೊಂಡು ಹೋದರೆ ರೈತ ನಿಸ್ಸಹಾಯಕ.

(೩ನೇ ಪುಟಕ್ಕೆ)

ಬೇತಾಳಪ್ರೇಮಿಗಳಿಗಾಗಿ,

# ಶೇಷಣ್ಣ ಮಾಸ್ಟರು ಸಸ್ಪೆಂಡಾದದ್ದು

ಹೆಗ್ಗಾರು ಜಯಂತ್

ಕಾಂಗ್ರೆ ಭಿನ್ನ ಮತೀಯರಂತೆ ಛಲ ಬಿಡದ ತ್ರಿವಿಕ್ರಮನು ಸ್ಮಶಾನಕ್ಕೆ ಹಿಂದಿರುಗಿ ಕರ್ತವ್ಯವೆಂಬಂತೆ ಬೇತಾಳವನ್ನು ಹೆಗಲಿಗೇರಿಸಿ ಮುನ್ನಡೆದನು. ಹರಕು ಬಾಯಿಯ ಬೇತಾಳವು ಸುಮ್ಮನಿರಲಾರದೆ, "ಎಲೈ ರಾಜನೇ, **'ಲಂಚವು ವಿಶ್ವವ್ಯಾಪಿ'** ಎಂದು ನಮ್ಮ ಪ್ರಧಾನಿಯೇ ಹೇಳಿದ್ದರೂ, ಲಂಚವೇ ಸಿಕ್ಕದ ಬಡ ಪ್ರಾಥಮಿಕ ಶಾಲಾ ಉಪಾಧ್ಯಾಯ ಮುಖವಾಗಿಬು ಶೇಷಣ್ಣ ಮಾಸ್ತರು ಲಂಚದ 'ಪ್ರಕರಣ'ದಲ್ಲಿ ಸಸ್ಪೆಂಡಾದ ವಿಚಿತ್ರ ಕತೆ ಹೇಳುತ್ತೇನೆ, ಕೇಳು" ಎಂದು ಆರಂಭಿಸಿತು.

ವರದಕ್ಷಿಣೆ ತೆಗೆದುಕೊಂಡು ಮಾವನನ್ನು ಸಾಕಷ್ಟು ಹಿಂಸಿಸಿ ಮದುವೆಯಾದ ಶೇಷಣ್ಣ ಮಾಸ್ತರು ಸಾಕಷ್ಟು ದವಲತ್ತಿನಿಂದಲೇ ಜೀವನ ನಡೆಸುತ್ತಿದ್ದರು. ಈ ಮಾಸ್ಟರ ವೈಭೋಗ ಜೀವನ ಬೇರೆಯವರಿಗೆ ಅಸೂಯೆಯನ್ನು ತರುವಂತಿತ್ತು. ಯಾವ ನೆಪದಿಂದಲಾದರೂ ಎರಡು ಮೂರು ತಿಂಗಳಿಗೊಮ್ಮೆ ಮಾವನನ್ನು ಹಿಂಸಿಸಿ ಹಣ ತರಿಸಿಕೊಳ್ಳುತ್ತಿದ್ದರು.

ಕಾಲಕ್ಕೆ ತಕ್ಕಂತೆ ಶೇಷಣ್ಣ ಮಾಸ್ಟರು ಕೂಡ 'ಎಣ್ಣೆ ಹಾಕುವುದು' ಹಾಗೂ ಇಸ್ಪೀಟ್ ಆಟಗಳಿಗೆ ಒಗ್ಗಿ ಹೋಗಿದ್ದರು. ಈ ವಿಲಾಸ ಜೀವನಕ್ಕೆ ಮಾಸ್ಟರ ಸಂಬಳ ಎಲ್ಲಿ ಸಾಕಾಗಬೇಕು?

'ಮಾವನವರೇ, ನಿಮ್ಮ ಅಭಿಲಾಷೆಯಂತೆಯೇ, ಊರಿನ ಕಡೆ ವರ್ಗ ಮಾಡಿಸಿಕೊಳ್ಳಲು ಪ್ರಯತ್ನಿಸಿರುವೆ. ಎ.ಇ.ಓ.ರವರು ವರ್ಗಾವಣೆಗೆ ಮುನ್ನೂರು ರೂಪಾಯಿಗಳನ್ನು ಕೇಳಿರುತ್ತಾರೆ. ಡಿ.ಡಿ.ಪಿ.ಐ.ರವರು ಐನೂರು ರೂಪಾಯಿಗಳನ್ನು ಕೇಳಿರುತ್ತಾರೆ. ಆದ್ದರಿಂದ ಈ ಕಾಗದ ತಲುಪಿದ ಕೂಡಲೆ ಒಂದು ಸಾವಿರ ರೂಪಾಯಿಗಳನ್ನು ಕಳಿಸಿ ಕೊಡಿ. ಇನ್ನು ೩ ತಿಂಗಳಲ್ಲಿ ಊರಿನ ಕಡೆ ವರ್ಗ ಮಾಡಿಸಿಕೊಂಡು ಬರುತ್ತೇನೆ' ಎಂದು ಕಾಗದ ಬರೆದರು. ಆದರೆ ೩ ತಿಂಗಳಲ್ಲಿ ವರ್ಗವಣೆಯಾಗುವುದು ಬಿಟ್ಟು ೩ ತಿಂಗಳ ಒಳಗಡೆಯೇ ಶೇಷಣ್ಣ ಮಾಸ್ಟರಿಗೆ **ಸಸ್ಪೆಂಡ್ ಆರ್ಡರು ಬಂತು!**

ತಿರುಪತಿ ಕ್ಷೌರಿಕನ ಹಾಗೆ ಬೇತಾಳವು ಕತೆಯನ್ನು ಇಷ್ಟಕ್ಕೇ ನಿಲ್ಲಿಸಿ, ಪಾಂಡಿತ್ಯ ಪ್ರದರ್ಶನಕ್ಕೆ ಇಳಿಯಿತು—"ಎಲೈ ರಾಜನೇ, ಮಾವನಿಗೆ ಅಳಿಯ ಕಾಗದ ಬರೆದರೆ ಸಸ್ಪೆಂಡ್ ಆಗುವನೇ? ಶೇಷಣ್ಣ ಮಾಸ್ಟರು ಸಸ್ಪೆಂಡ್ ಆಗಲು ಕಾರಣ ಏನು? ನಿಜಸ್ಥಿತಿ ನಿನಗೆ ತಿಳಿದೂ ನೀನು ಹೇಳದಿದ್ದರೆ ಕರ್ನಾಟಕದ ಕಾಂಗ್ರೆಸ್ ಮಂತ್ರಿಗಳು ಉರುಳಿ ಹೋದ ಹಾಗೆ ನಿನ್ನ ತಲೆಯೂ ಉರುಳಿ ಹೋಗುವುದು" ಎನ್ನಲು ದಾಶರಥಿ ದೀಕ್ಷಿತರಂತೆ ಇಳಿದ ಮೀಸೆಯಡಿಯಲ್ಲೇ ನಕ್ಕ ತ್ರಿವಿಕ್ರಮ ಹೇಳಿದ—

"ಎಲೈ ಬೇತಾಳವೇ, ನಡೆದ ಸಂಗತಿಯನ್ನು ಹೇಳುತ್ತೇನೆ ಕೇಳು. ಶೇಷಣ್ಣ ಮಾಸ್ಟರು ಗಡಿಬಿಡಿಯಲ್ಲಿ ಕಾಗದ ಬರೆದು ಮಾವನ ವಿಳಾಸವನ್ನು ಬರೆಯದೆ ಹಾಗೆಯೇ ಅಂಚೆಗೆ ಹಾಕಿದ್ದರು. ವಿಳಾಸವಿಲ್ಲದ ಕಾಗದವನ್ನು ಅಂಚೆಯವರು ಆರ್. ಎಲ್. ಓ. (ವಿಳಾಸವಿಲ್ಲದ ಕಾಗದವನ್ನು ಒಡೆದು ವಿಳಾಸ ಪತ್ತೆ ಮಾಡುವ ಕಚೇರಿ)ಗೆ ಕಳಿಸಿದರು. ಕಾಗದವನ್ನು ಒಡೆದು ಓದಲಾಗಿ ಯಾರ ವಿಳಾಸವೂ ಸರಿಯಾಗಿ ಕಾಗದದ ಒಳಗೆ ಎಲ್ಲೂ ಇರಲಿಲ್ಲ. ಆದರೆ ಕಾಗದ ಮಾತ್ರ ಒಬ್ಬ ಉಪಾಧ್ಯಾಯನದು ಎಂದು ತಿಳಿದುಕೊಂಡರು. ಕಾಗದದ ಹೊರಗಡೆ ಮೊಹರನ್ನು ಪರೀಕ್ಷಿಸಲಾಗಿ ಅದು ಶಿವಮೊಗ್ಗ ಜಿಲ್ಲೆಯ ಒಸ್ಸ ತಾಲ್ಲೂಕಿನದು ಎಂದು ತಿಳಿದುಕೊಂಡರು. ಹಾಗಾಗಿ ಒಸ್ಸ ತಾಲ್ಲೂಕಿನ ವಿದ್ಯಾಧಿಕಾರಿಗಳಿಗೆ ತಲುಪಿಸಿದರೆ ಉಪಾಧ್ಯಾಯರಿಗೆ ತಲುಪಬಹುದೆಂಬ ಸದುದ್ದೇಶದಿಂದ ಅಲ್ಲಿಗೆ ಕಳಿಸಿದರು. ಶೇಷಣ್ಣ ಮಾಸ್ಟರನ್ನು ಪ್ರತಿ ಮೀಟಿಂಗ್‌ನಲ್ಲಿ ಚೆನ್ನಾಗಿ ಬಲ್ಲ ಎ. ಇ. ಓ. ರವರು ತಮ್ಮ ಮೇಲೆಯೇ ಈ ರೀತಿ ಲಿಖಿತ ಆಪಾದನೆ ಮಾಡಿರುವುದನ್ನು ಹಾಗೂ ತಮ್ಮ ಮೇಲಧಿಕಾರಿಗಳ ಮೇರೆ ಲಂಚದ ಆಪಾದನೆಯನ್ನು ಸಹಿಸಲಾಗದೆ ಪತ್ರ ಕಾಗದವನ್ನು ತಮ್ಮ ಟಿಪ್ಪಣಿಯೊಂದಿಗೆ ಡಿ.ಡಿ.ಪಿ.ಐ. ರವರಿಗೆ ಕಳಿಸಿದರು.

ನಿಷ್ಠಾವಂತರಾದ ಡಿ.ಡಿ.ಪಿ.ಐ.ರವರು ತಮ್ಮ ಮೇಲೆಯೂ ಈ ರೀತಿ ಲಿಖಿತ ಆಪಾದನೆ ಇರುವುದನ್ನು ನೋಡಿ ಕೂಡಲೆ ಶೇಷಣ್ಣ ಮಾಸ್ಟರನ್ನು **'ಮಾವನ ಮನೆಗೇ ಕಳಿಸಿದರು'** ಎಂದು ಹೇಳಿದ ರಾಜನು ಬೇತಾಳವನ್ನು ಪುನಃ ಮರದ ಕೊಂಬೆಗೇ ನೇತು ಹಾಕಿ ಅದೃಶ್ಯನಾದನು!

## ಊರಲ್ಲಿ ಗಲಭೆ ವರದಿ: ಕೊಲ್ಲಪ್ಪಗೌಡರ ಪ್ರತಿಕ್ರಿಯೆ

೨೦-೨-೮೪ರ ಪತ್ರಿಕೆಯಲ್ಲಿ 'ತಾ.ಪ್ರ. ಮಂ. ಸದಸ್ಯನಿಂದ ಊರಲ್ಲಿ ಗಲಭೆ' ಎಂಬ ವರದಿಗೆ ಪ್ರತಿಕ್ರಿಯೆ.

ಕೆರೆಯ ನೀರು ಕಟ್ಟೆ ಒಡೆದು ನುಗ್ಗಿತೆಂದು ಹೇಳಲಾದ ಘಟನೆಗೂ ನನಗೂ ಸಂಬಂಧವಿಲ್ಲ. ನಾನು ತೋಟಕ್ಕೆ ನೀರು ಬಿಡಲು ಕಟ್ಟೆ ಒಡೆದೆನೆಂದು ಹೇಳಿರುವುದು ಅಪಪ್ರಚಾರ. ನಾನು ತೋಟಕ್ಕೆ ನೀರು ಬಿಟ್ಟಿಲ್ಲ. ರಿಪೇರಿಗಾಗಿ ಮಣ್ಣು ಕಡಿದಕಡೆ ನೀರು ಒಸರಿ ಸ್ವಲ್ಪ ಮಣ್ಣು ಕೊಚ್ಚಿ ಹೋಗಿ ಹೆಚ್ಚು ನೀರು ನುಗ್ಗಿರಬಹುದು. ಅಂತೂ ಆ ದಿನ ಯಾರ ಗದ್ದೆಗೂ ಹಾನಿಯಾಗಿಲ್ಲ.

ಭೂಸುಧಾರಣೆ ಜಾರಿ ಮುಂತಾದ ಸಂದರ್ಭಗಳಲ್ಲಿ ನನ್ನ ಮೇಲೆ ದ್ವೇಷ ಕಟ್ಟಿಕೊಂಡಿರುವ ಕೆಲವರು ಈ ಸಂದರ್ಭದಲ್ಲಿ ನನ್ನ ಮೇಲೆ ಕೆಲವರನ್ನು ಎತ್ತಿಕಟ್ಟಿ ಶನಿವಾರ ಸಂಜೆಯಿಂದ ಕಾದಿದ್ದು ಭಾನುವಾರ ಬೆಳಿಗ್ಗೆ ಹಲ್ಲೆ ಮಾಡಿಸಿದ್ದಾರೆಯೇ ವಿನಃ ನಾನು ಯಾರ ಮೇಲೂ ಹಲ್ಲೆ ಮಾಡಿಲ್ಲ. ನಾನು ಬೆದರಿಕೆ ಹಾಕುತ್ತಿದ್ದೇನೆಂಬುದು ಕೂಡ ಸತ್ಯಕ್ಕೆ ದೂರವಾದದ್ದು. ವಾಸ್ತವವಾಗಿ ನಾನು ೩ ದಿನ ಆಸ್ಪತ್ರೆಯಲ್ಲಿ ದಾಖಲಾಗಿದ್ದೆ.

ಹೀಗೆ ವೈಯಕ್ತಿಕ ದ್ವೇಷದಿಂದ ಊರ ಶಾಂತಿ ಕೆಡಿಸುವುದನ್ನು ಸಂಬಂಧಪಟ್ಟವರು ಕೈ ಬಿಡಲಿ ಎಂಬುದೇ ನನ್ನ ಆಸೆ.

—**ಹೆಚ್. ಕೊಲ್ಲಪ್ಪಗೌಡ,**
ಹಾಲ್ಮುತ್ತೂರು.

### ಓದುಗರ ಪತ್ರಗಳು

### ಶೃಂಗೇರಿ ಶ್ರೀಗಳಿಗೆ ಸ್ವಾಗತ:

## ಧರ್ಮದ ಹೆಸರಲ್ಲಿ ವರ್ತಕರ ಸುಲಿಗೆ?

ಶೃಂಗೇರಿ ಶ್ರೀಗಳು ಉತ್ತರ ಭಾರತ ಪ್ರವಾಸ ಮುಗಿಸಿ ಹಿಂದಿರುಗಿದಾಗ ಶಿಷ್ಯರಾದ ನಾವುಗಳು ಸಂಪ್ರದಾಯದಂತೆ ಸ್ವಾಗತಿಸುವುದು ಸಮ್ಮತ. ಆದರೆ ಊರಿನ ಕೆಲವು ರಾಜಕಾರಣಿಗಳು ತಾವೇ ನಾಲ್ಕಾರು ಜನ ಸೇರಿ ಸ್ವಾಗತ ಸಮಿತಿ ರಚಿಸಿಕೊಂಡು ಶ್ರೀಗಳವರಿಗೆ ಕಾಣಿಕೆ ಸಮರ್ಪಿಸುವ ನೆಪದಿಂದ ತಾಲ್ಲೂಕ್ ತಹಸಿಲ್ದಾರರೊಡಗೂಡಿ ಪ್ರತಿ ಅಂಗಡಿಗೂ ತೆರಳಿ ಸುಮಾರು ೨೫ ರೂ.ಗೆ ಮೇಲ್ಪಟ್ಟು ಚಂದಾ ಹಣ ವಸೂಲು ಮಾಡಿರುತ್ತಾರೆ. ಈ ಬಗ್ಗೆ ಸಾರ್ವಜನಿಕರು ಪ್ರತಿಭಟಿಸಲು ಕಾಲಾವಕಾಶವೇ ನೀಡಿಲ್ಲ ಹಾಗೂ ಸರಕಾರಿ ಅಧಿಕಾರಿಗಳ ಮೂಲಕ ವಸೂಲಾದ್ದರಿಂದ ಪ್ರತಿಯೊಬ್ಬನಲ್ಲೂ ಚಿಕ್ಕ-ಚಿಕ್ಕ ನ್ಯೂನತೆಗಳಿರುವ ಭಯದಿಂದ ಪ್ರತಿಭಟಿಸಲು ನಾವು ಅಂಜಬೇಕಾಗಿದೆ.

ಧರ್ಮದ ಹೆಸರಿನಲ್ಲಿ, ಗುರುವಿನ ಹೆಸರಿನಲ್ಲಿ ಭ್ರಷ್ಟಾಚಾರಗಳು ನಡೆಯುತ್ತಲೇ ಇವೆ. ಶೃಂಗೇರಿ ಶ್ರೀಗಳಿಗೆ ಊರಿನ ಬಡ ಜನತೆಯ ಕಣ್ಣೀರಿನ ಹಣ ಯತ್ಕಿಂಚಿತ್ ಅವಶ್ಯಕತೆ ಇಲ್ಲ. ಇದು ಊರಿನ ಪ್ರಮುಖರ ಹೆಸರಾಸೆಗೆ ವರ್ತಕ ವೃಂದದವರ ಸುಲಿಗೆ. ಮೊನ್ನೆತಾನೆ ೨೬-೧-೮೪ರಂದು ಸಿಹಿ ತಿಂಡಿ ಹಂಚುವ ಬಗ್ಗೆ ವಸೂಲು ಮಾಡಿದ್ದಾರೆ. ಹಾಗೆ ವಾರ-ವಾರಗಳಲ್ಲೂ ಚಂದಾ-ಲಂಚ-ಟ್ಯಾಕ್ಸ್ ಹೆಚ್ಚುತ್ತಾ ಹೋದರೆ ಅಂತಿಮ ಘಟ್ಟ ಮುಟ್ಟುವುದು ಯಾವಾಗ? ಈ ಬಗ್ಗೆ ಸ್ಥಳೀಯ ಪತ್ರಿಕೆಯವರು ವಿಮರ್ಶಿಸಿ ಸಾರ್ವಜನಿಕರ ನ್ಯೂನತೆ ಹೋಗಲಾಡಿಸಲು ಪ್ರಯತ್ನಿಸಿ.

—**ನೊಂದವರು**, ಶೃಂಗೇರಿ.

[ಈ ಪತ್ರದ ಬಗ್ಗೆ ಪ್ರತಿಕ್ರಿಯೆ ಕೇಳಿ ಶೃಂಗೇರಿ ತಹಸೀಲ್ದಾರರಿಗೂ, ಸ್ವಾಗತ ಸಮಿತಿ ಅಧ್ಯಕ್ಷರಾದ ಶ್ರೀ ಎಂ. ಎಸ್. ಚಂದ್ರಶೇಖರ್ ಅವರಿಗೂ ಬರೆದ ಪತ್ರಗಳಿಗೆ ಚಂದ್ರಶೇಖರ್ ತಕ್ಷಣ ಉತ್ತರಿಸಿದ್ದಾರೆ. ತಹಸೀಲ್ದಾರರು ಎಂದಿನಂತೆಯೇ ನಿರ್ಲಕ್ಷ್ಯ ತೋರಿಸಿದ್ದಾರೆ. ಹಿಂದೆ ಗಣಪತಿಹಬ್ಬದ ಸಂದರ್ಭದಲ್ಲೂ ಹೀಗೇ ತಹಸಿಲ್ದಾರ್ ಮತ್ತು ಪೋಲೀಸ್ ಸ.ಇ.ರೊಂದಿಗೆ ಹಣ ಸಂಗ್ರಹಣೆ ನಾವಾಗಿದ್ದಾಗಿ ದೂರುಗಳು ಬಂದಿದ್ದವು. ಆ ಬಗ್ಗೆ ಸಹ ನಮ್ಮ ಪತ್ರದಲ್ಲಿ ಪ್ರಸ್ತಾಪಿಸಲಾಗಿತ್ತು. —**ಸಂ.**]

### ಸ್ವಾಗತ ಸಮಿತಿ ಅಧ್ಯಕ್ಷರ ಪ್ರತಿಕ್ರಿಯೆ

ಸಂಪಾದಕರಿಗೆ,

ನಿಮ್ಮ ಪತ್ರಕ್ಕೆ ಈ ಕೆಳಕಂಡಂತೆ ನನ್ನ ಅಭಿಪ್ರಾಯ ವ್ಯಕ್ತಪಡಿಸಲು ಅಪೇಕ್ಷಿಸುತ್ತೇನೆ.

(೧) ಜಗದ್ಗುರುಗಳ ವರ್ಧಂತ್ಯುತ್ಸವ ಸಮಿತಿಯವರು ಒಂದು ಸ್ವಾಗತ ಸಮಿತಿ ರಚಿಸಿ, ೨೮-೧-೮೪ರಂದು ಶ್ರೀಗಳ ಸ್ವಾಗತಕ್ಕೆ ವ್ಯವಸ್ಥೆ ಮಾಡಿದ್ದರು. ಈ ಸಮಿತಿಯಲ್ಲಿ ತಾ||ನ ಎಲ್ಲ ಹಿರಿಯ/ಕಿರಿಯ ಅಧಿಕಾರಿಗಳೂ ಸದಸ್ಯರಾಗಿದ್ದಾರೆ. ನಾವೆಲ್ಲರೂ ಕೂಡಿ ಈ ಕಾರ್ಯಕ್ಕೆ ಹಣ ಸಂಗ್ರಹ ಮಾಡಿದ್ದೆವು. ಯಾರಿಗೂ ಬಲವಂತ – ದರ್ಪಗಳಿಂದ ವಸೂಲಿಗೆ ಅವಕಾಶ ಮಾಡಿಲ್ಲ. ಎಲ್ಲರೂ ಗುರುಕಾಣಿಕೆರೂಪದಲ್ಲಿ ಭಕ್ತಿಯಿಂದ ನೀಡಿದ್ದಾರೆ. ಕೇವಲ ೩೩ ಜನರಿಂದ ೨೦೦೪ರೂ.ಗಳನ್ನು ಸಂಗ್ರಹಿಸಲಾಗಿತ್ತು. (ಇಲ್ಲಿ ಖರ್ಚಿನ ವಿವರ ಕೊಟ್ಟಿದ್ದಾರೆ. —ಸಂ.) ಹಣ ಪಾವತಿಸಿದವರಿಗೆ ಶ್ರೀಗಳ ಪ್ರಸಾದ ಮತ್ತು ಜಮಾಖರ್ಚು ಪಟ್ಟಿ ರವಾನೆಗೆ ವ್ಯವಸ್ಥೆ ಮಾಡಲಾಗಿದೆ. ಇದರಲ್ಲಿ ಯಾವುದೇ ಅಕ್ರಮ-ಭ್ರಷ್ಟಾಚಾರಕ್ಕೆ ಅವಕಾಶವಿಲ್ಲ ಎಂದು ಈ ಮೂಲಕ ವಿನಂತಿಸುತ್ತೇನೆ.

(೨) ೨೬-೧-೮೪ರಂದು ಗಣರಾಜ್ಯೋತ್ಸವಕ್ಕೆ ವರ್ತಕರ ಸಂಘದವರು ಸಿಹಿ ತಿಂಡಿ ಹಂಚಿದ್ದಾರೆ. ಅದರ ಹಣ ಸಂಗ್ರಹಣೆ ವಿಷಯ ಆ ಸಂಘದ ಪದಾಧಿಕಾರಿಗಳಿಗೆ ಸಂಬಂಧಪಟ್ಟಿದ್ದು.

(೩) ಗಣಪತಿ ಉತ್ಸವದಲ್ಲಿಯೂ ಸಹ ಹಿರಿಯ ಅಧಿಕಾರಿಗಳು ಸದಸ್ಯರಾಗಿ ಭಕ್ತಿಯಿಂದ ಸೇವೆ ಮಾಡಿ ಸಹಕಾರ ನೀಡಿದ್ದಾರೆ. ಅವರುಗಳು ನಮ್ಮೊಡನೆ ಹಣ ಸಂಗ್ರಹಣೆಗೆ ಬಂದಿದ್ದನ್ನು ಕೆಲವರು ಆಕ್ಷೇಪಿಸಿದರು. ಆದರ ಮೇಲೆ ಈ ವರ್ಷ ಹಣ ಸಂಗ್ರಹಣೆಗೆ ಅವರನ್ನು ಕೈ ಬಿಡಲಾಗಿತ್ತು. ಆದರ ಜಮಾ ಖರ್ಚುಗಳನ್ನೂ ಅಚ್ಚು ಹಾಕಿ ಸಾರ್ವಜನಿಕವಾಗಿ ಎಲ್ಲರಿಗೆ ಹಂಚಲಾಗಿದೆ.

ನಮ್ಮ ಕೋರಿಕೆಯಂತೆ ಅಧಿಕಾರಿಗಳು ನಮ್ಮೊಡನೆ ಭಾಗವಹಿಸಿದ್ದರೇ ವಿನಃ ವಿನಾ ಕಾರಣ ಯಾರಿಗಾದರೂ ತೊಂದರೆ ಕೊಟ್ಟಿರುವುದು ನನ್ನ ಗಮನಕ್ಕೆ ಬಂದಿಲ್ಲ.

ಮುಂಜಾಗ್ರತೆಯ ಸಲಹೆಗಾಗಿ ಧನ್ಯವಾದಗಳು. ಮುಂದೆ ಈ ಬಗ್ಗೆ ಸೂಕ್ತ ಬದಲಾವಣೆಯ ಸಲಹೆಯನ್ನು ಸಮಿತಿಯಲ್ಲಿ ಮಂಡಿಸುತ್ತೇನೆ. ನಿಮ್ಮ ಸೌಜನ್ಯಕ್ಕೆ ಅಭಿನಂದನೆಗಳು.

—**ಎಂ. ಎಸ್. ಚಂದ್ರಶೇಖರ್,**
ಸ್ವಾಗತ ಸಮಿತಿ ಅಧ್ಯಕ್ಷ.

## ಬಲಿಯಾಗುತ್ತಿರುವ ರೈತಬೇಡಿಕೆ: ಸೊಪ್ಪಿನಬೆಟ್ಟ

(೨ನೇ ಪುಟದಿಂದ)

ಇದರ ಮೇಲೆ ಅಕಸ್ಮಾತ್ ಅಸ್ತಿತ್ವ ಕಾಡು-ಕುರುಚಲು ಅಲ್ಲಲ್ಲಿ ಬೆಳೆದಿದ್ದರೂ ಅದರ ರಕ್ಷಣೆಗಿಂತ ಧ್ವಂಸ ಮಾಡುವುದೇ ಅರಣ್ಯ ಇಲಾಖೆಯ ಹೊಣೆ ಆಗಿರುವಂತೆ ಕಾಣುತ್ತದೆ. ಉಳಿದುಳಿದ ಸೊಪ್ಪಿನ ಬೆಟ್ಟಗಳೂ ಸರ್ಕಾರಿ ದಾಖಲೆಗಳಲ್ಲಿವೆಯೇ ಹೊರತು ವಾಸ್ತವವಾಗಿ ಅವೆಲ್ಲ ಒತ್ತುವರಿಯಾಗಿ ಹೋಗಿರುವುದೇ ಹೆಚ್ಚು.

ರೈತನ ಕಣ್ಣ ಮುಂದೆ ಅವನ ಮನೆ ಎದುರಿಂದಲೇ ಕಾಡು ಲೂಟಿಯಾದರೂ ಆತ ನಿಸ್ಸಹಾಯಕ. ಆದರೆ ಆತನೇ ಸೊಪ್ಪು-ಸೌದೆ ಅಂತ ಕಾಡಿಂದ ತಂದರೆ ಕಾನೂನು ಪ್ರಕಾರ ಶಿಕ್ಷೆಗೆ ಒಳಗಾಗಬೇಕಾಗುತ್ತದೆ. ಮಲೆನಾಡಿನ ಈ ಹಳ್ಳಿಗಳಲ್ಲಿ ಇಷ್ಟು ಸಣ್ಣ ವಿಷಯಕ್ಕೆ ಅಷ್ಟು ಕಠಿಣವಾಗಿ ಕಾನೂನನ್ನು-ಎಲ್ಲ ಕಡೆ ಚಲಾಯಿಸದಿರಬಹುದು. ಆದರೆ ಇಲಾಖೆಯ ಸ್ಥಳೀಯ ಸಿಬ್ಬಂದಿ ರೈತನ **ತಲೆಯ** ಮೇಲೆ ಯಾವಾಗಲೂ ತೂಗುಕತ್ತಿಯಾಗಿ ತೂಗುತ್ತಲೇ ಇರುತ್ತಾರೆ. ತಮ್ಮ **ಹೊಲಸು ಹೊಟ್ಟೆ, ಹರಕು ಜೇಬು** ತುಂಬಿಸಿಕೊಳ್ಳುವಲ್ಲಿ ರೈತರಿಗೆ ಕಿರುಕುಳ ಕೊಡಲು ಅವರಿಗೆ ಈಗಲೇ ಕಾನೂನುಗಳಲ್ಲಿ ಬೇಕಾದಷ್ಟು ಅವಕಾಶ ಇದೆ.

### ರೈತ ಏನು ಹೇಳುತ್ತಾನೆ?

ಈ ನಿರಂತರ ತೂಗುಕತ್ತಿಯಿಂದ ತಪ್ಪಿಸಿಕೊಳ್ಳುವುದು ಹಾಗೂ ಜಮೀನಿನ ಹದವರಿತ ಆರೈಕೆ ರೈತನಿಗೆ ಸಾಧ್ಯವಾಗಬೇಕಾದರೆ ಪ್ರತಿ ಗ್ರಾಮದಲ್ಲೂ ಎಕರೆಗೆ ಇಂತಿಷ್ಟು ಎಂದು ಸೊಪ್ಪಿನ ಬೆಟ್ಟವನ್ನು ಮೀಸಲು ಇಡಬೇಕು. ಪ್ರತೀ ಹಿಡುವಳಿದಾರನಿಗೆ ತನ್ನ ಪಾಲಿನ ಹಾಡ್ಯದಲ್ಲಿ ಸಂಪೂರ್ಣ ಅಧಿಕಾರವಿರಬೇಕು. **ಆದರೆ ಅದನ್ನು ಮಾರಲು ಅಥವಾ ಸಾಗುವಳಿಗೆ ಪರಿವರ್ತಿಸಲು ಅವಕಾಶವಿರಬಾರದು.** ಒಂದು ಜಮೀನು ಮಾರಾಟವಾದರೆ ಅದರ ಜೊತೆಗೇ ಅದಕ್ಕೆ ಸೇರಿದ ಸೊಪ್ಪಿನ ಬೆಟ್ಟವೂ ಕೊಂಡವನಿಗೆ ಸೇರಬೇಕು. ಸಾಧ್ಯವಾದಷ್ಟೂ ಈ ವ್ಯವಸ್ಥೆಯ ನಿಯಂತ್ರಣ ಸ್ಥಳೀಯ ಪಂಚಾಯಿತಿಯ ಕೈಯಲ್ಲಿರಬೇಕು. ಇದು ಸಾಮಾನ್ಯವಾಗಿ ರೈತರ ಅಭಿಪ್ರಾಯ.

### ಕಾಡಿನ ಪ್ರಮಾಣ ಹೆಚ್ಚುತ್ತದೆ

ವಿಶ್ವಸಂಸ್ಥೆಯ ಅಧ್ಯಯನವೊಂದರಲ್ಲಿ ಜಮೀನಿನ ವಿಸ್ತರಣೆಗಾಗಿ ಕಾಡು ನಾಶವಾಗುವುದರ ಬಗ್ಗೆ ಆತಂಕ ವ್ಯಕ್ತಪಡಿಸುತ್ತಾ, ಸಾಗುವಳಿ ಆಗುತ್ತಿರುವ ಜಮೀನಿನ ಶೇ. ೩೩ರಷ್ಟಾದರೂ ಕಾಡು ಉಳಿಸಲು ಶಿಫಾರ್ಸು ಮಾಡಲಾಗಿತ್ತು. ಈ ಪ್ರಮಾಣ ಶೇ. ೨೦ಕ್ಕಿಂತಲೂ ಕಡಿಮೆ ಆದರೆ ವಿನಾಶ ಖಾತರಿ ಎನ್ನಲಾಗಿತ್ತು. ಈ ಶಿಫಾರ್ಸುಗಳನ್ನನ್ನುಸರಿಸಿ ನಮ್ಮ ಕೇಂದ್ರ ಸರ್ಕಾರ ಹಲವು ನಿಯಮಾವಳಿಗಳನ್ನು ಮಾಡಿದೆ. ಆದರೂ ದೇಶದಲ್ಲಿ ಈ ಪ್ರಮಾಣ ಶೇ.೧೮ಕ್ಕಿಂತಲೂ ಕಡಿಮೆಯಿದೆಯೆಂದು ಹೇಳಲಾಗಿದೆ.

ಸೊಪ್ಪಿನ ಬೆಟ್ಟದ ವ್ಯವಸ್ಥೆ ಜಾರಿಗೆ ಬಂದರೆ ಕಾಡಿನ ಪ್ರಮಾಣ ತಾನೇ ತಾನಾಗಿ ಹೆಚ್ಚುತ್ತದೆ. ತಮ್ಮ ಈ ಸಣ್ಣ ಕಾಡುಗಳ ರಕ್ಷಣೆ ಮತ್ತು ಬೆಳವಣಿಗೆಯನ್ನು ರೈತರೇ ನೋಡಿಕೊಳ್ಳುವುದರಿಂದ ಇಲಾಖೆಯ ಹೊರೆಯೂ ಕಮ್ಮಿಯಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ರೈತರು ಯಾರ ಹಂಗಿಗೂ, ಕಿರುಕುಳಕ್ಕೂ ಒಳಗಾಗದೆ ತಮ್ಮ ಜಮೀನಿನ ಆರೈಕೆಯನ್ನು ಕ್ರಮವಾಗಿ ಮಾಡಲು ಸಾಧ್ಯವಾಗುತ್ತದೆ.

ಹೀಗೆ ರೈತರ ಈ ಬೇಡಿಕೆ ಈಡೇರಿಸುವುದರಿಂದ ಸರ್ಕಾರದ ಕೆಲಸವೂ ಆಗುತ್ತದೆ, ಕೃಷಿ ಉತ್ಪಾದನೆಯೂ ಹೆಚ್ಚುತ್ತದೆ.

[ಹಲವು ಹಿರಿಯ ರೈತರಿಂದ ಅಭಿಪ್ರಾಯ ಸಂಗ್ರಹಿಸಿ ಈ ಲೇಖನ ತಯಾರಿಸಲಾಗಿದೆ. ಓದುಗರು ಇದನ್ನು ವಿಮರ್ಶಿಸಿ ಅಭಿಪ್ರಾಯಗಳನ್ನು ಕಳಿಸಿ. ದೋಷಗಳಿದ್ದರೆ ಸರಿಯಾದ ಅಭಿಪ್ರಾಯ ಕೊಡಿ. ಹೊಸ ಸಲಹೆಗಳಿದ್ದರೆ ತಿಳಿಸಿ. ಸೊಪ್ಪಿನ ಬೆಟ್ಟದ ಈ ಬೇಡಿಕೆ ಸಮರ್ಪಕವಾಗಿದ್ದಲ್ಲಿ ರೈತರು ಮಲೆನಾಡಿನ ಶಾಸಕರುಗಳ ಮೂಲಕ ಸರಕಾರಕ್ಕೆ ಮನವರಿಕೆ ಮಾಡಿಕೊಡಲು ಮುಂದಾಗಬೇಕು. —**ಸಂಪಾದಕ**]



### ಹಳ್ಳಿಗರ ಒಂದು ವಿಚಿತ್ರ ಕೋರಿಕೆ:

## "ಜಲ್ಲಿ ತೆಗೆಸಿ ನಮ್ಮ ಮಣ್ಣುರಸ್ತೆ ಉಳಿಸಿ"

ಶೃಂಗೇರಿ: ಊರಿಗೆ ಸೌಲಭ್ಯ ಕೇಳುವಾಗ ಜನ 'ರಸ್ತೆಗೆ ಟಾರು ಹಾಕಿಸಿ, ಜಲ್ಲಿ ಹಾಕಿಸಿ' ಮುಂತಾಗಿ ಕೇಳುವುದು ಸಹಜ. ಆದರೆ 'ಜಲ್ಲಿ ಹಾಕಿಸಿರುವುದನ್ನು ತೆಗೆದು ನಮಗೆ ಮಣ್ಣಿನ ರಸ್ತೆಯನ್ನೇ ಉಳಿಸಿ' ಎಂದು ಎಲ್ಲಾದರೂ ಕೇಳುವುದುಂಟೆ?

ಈ ತಾಲ್ಲೂಕಿನ ಬಾಗೋಡು, ಹಾಲಗಾರು ಮುಂತಾದ ಗ್ರಾಮಗಳವರು ಇಂತ ವಿಚಿತ್ರ ಕೋರಿಕೆ ಮಾಡುತ್ತಿರುವ ವಿಚಿತ್ರ ಜನರಾಗಿದ್ದಾರೆ. ಹಾಗೆಂದು, ಆ ರಸ್ತೆಯನ್ನು ನೋಡಿದರೆ ಅವರ ಕೋರಿಕೆ ವಿಚಿತ್ರವೆನಿಸುವುದಿಲ್ಲ.

ನೆಮ್ಮಾರ್ ಕೆರೆಕಟ್ಟೆ-ಬಿ.ಜಿ.ಕಟ್ಟೆ ನಡುವೆ ಸಂಪರ್ಕ ಕಲ್ಪಿಸುವ ೮ ಕಿಲೋಮೀಟರ್ ಉದ್ದದ ಈ ರಸ್ತೆಯಲ್ಲಿ ಕೆಲವು ... ಮೀ

(೪ನೇ ಪುಟಕ್ಕೆ)

## ನಲ್ಲಿ ನೀರಿನ ಸಮಸ್ಯೆ ಬಗ್ಗೆ ನಾಗರಿಕರಿಗೆ

# ಪುರಸಭೆಯ ಕೆಲವು ಸಲಹೆಗಳು

ಕೊಪ್ಪ: ಫೆ. ೧೫ರಂದು 'ಬಳಕೆದಾರರ ವೇದಿಕೆ' ಆಶ್ರಯದಲ್ಲಿ ನಡೆದ ನಲ್ಲಿ ನೀರು ಬಳಕೆದಾರರ ಸಭೆಯಲ್ಲಿ ನೀರು ಸರಬರಾಜು ವ್ಯವಸ್ಥೆಯ ತೊಂದರೆಗಳನ್ನು ಕುರಿತು ವಿವರಣೆ ನೀಡಿದ ಪುರಸಭಾ ಮುಖ್ಯಾಧಿಕಾರಿಗಳು ಜನರಿಗೆ ಈ ಕೆಳಗಿನ ಕೆಲವು ಸಲಹೆಗಳನ್ನು ಮಾಡಿದರು—

(೧) ಕೆಲವರಿಗೆ ನಲ್ಲಿಯಲ್ಲಿ ನೀರು ಬಿಡುವುದು ಗೊತ್ತೇ ವಿನಃ ನಿಲ್ಲಿಸುವುದು ಗೊತ್ತಿಲ್ಲ. ಹೀಗಾಗಿ ಅಪಾರ ನೀರು ಪೋಲಾಗುತ್ತದೆ. ಈ ಬೇಜವಾಬ್ದಾರಿತನವನ್ನು ಬಿಟ್ಟು ನೀರು ಪೋಲಾಗುವುದನ್ನು ತಪ್ಪಿಸಿ.

(೨) ಒಂದು ಅರ್ಧಂಗುಲ ಕೊಳವೆಯಿಂದ ಎರಡಕ್ಕಿಂತ ಹೆಚ್ಚು ಮನೆಗಳಿಗೆ ನೀರು ಒದಗಿಸುವುದು ಅಸಾಧ್ಯ. ಆದ್ದರಿಂದ ಒಂದೇ ಕೊಳವೆಯಿಂದ ಐದಾರು ನಲ್ಲಿಗಳನ್ನು ಹಾಕಿರುವಲ್ಲಿ (ಬಾಡಿಗೆ ಮನೆಗಳಲ್ಲಿ) ಹೆಚ್ಚು ನೇರ ಸಂಪರ್ಕಗಳನ್ನು ಹಾಕಿಸಿಕೊಳ್ಳಿ.

(೩) ಎಷ್ಟೋ ಕಡೆ ಕೊಳವೆಗಳ ಒಳಗೆ 'ಗ್ರಾವ್ಡ' ತುಂಬಿಕೊಂಡಿರುತ್ತದೆ. ನೀರು ಸರಬರಾಜು ಉತ್ತಮಗೊಂಡರೂ ಮನೆಗಳಲ್ಲಿನ ಪರಿಸ್ಥಿತಿ ಸುಧಾರಿಸುವುದು ಸಾಧ್ಯವಿಲ್ಲ ಎಂದು ಮುಖ್ಯಾಧಿಕಾರಿಗಳು ಒತ್ತಿ ಹೇಳಿದರು.

### ನೀಚತನ

ಕೊಪ್ಪ ಬಸ್ ಸ್ಟ್ಯಾಂಡ್ ಬಳಿ ಹೊಸದಾಗಿ ಕಟ್ಟಿಸಿರುವ ಸಾರ್ವಜನಿಕ ಶೌಚಗೃಹದ ನೀರಿನ ಟ್ಯಾಂಕಿಗೆ ಹೊರಗಡೆ ಜೋಡಿಸಿದ್ದ ಗಟ್ಟಿಮುಟ್ಟಾದ ನಲ್ಲಿಗಳನ್ನು ಯಾರೋ ಬೇಕೆಂದೇ ಕಿತ್ತಿದ್ದಾರೆ. ಅದನ್ನು ಹಾಗೇ ಬಿಟ್ಟರೆ, 'ನೋಡಿ ಪುರಸಭೆಯವರ ಕೆಲಸ. ನೀರೆಲ್ಲ ಪೋಲಾಗುತ್ತಿದೆ' ಎನ್ನುತ್ತಾರೆ. ನೀರು ನಿಲ್ಲಿಸಿದರೆ ಆಗಲೂ, 'ನೋಡಿ, ಸಾವಿರಾರು ರೂ. ದಂಡಮಾಡಿ ಟ್ಯಾಂಕಿ ಕಟ್ಟಿಸಿದರು. ನೀರು ಬಿಡುವ ಯೋಗ್ಯತೆಯಿಲ್ಲ' ಅಂತ ಟೀಕಿಸುತ್ತಾರೆ. ಬೇಕೆಂದೇ ಮುರಿಯುವ, ಮುರಿಸುವ ಜನ ಇರುವಾಗ ಎಷ್ಟು ಹೊಸ ನಲ್ಲಿಗಳನ್ನು ಹಾಕಿಸಲು ಸಾಧ್ಯ? ಇದು ಪುರಸಭೆಯ ಮುಂದಿರುವ ಸಮಸ್ಯೆ.

## ಅಂಗನವಾಡಿ ಶಾಲೆ, ನೀರು, ದೀಪಗಳಿಗಾಗಿ ಶಾಸಕರಿಗೆ ಮನವಿ

ಕೊಪ್ಪ: ಬಸವನ ಗದ್ದೆಯ ಗ್ರಾಮಸ್ಥರು ಫೆ. ೨೦ರಂದು ಶಾಸಕ ಹೆಚ್.ಜಿ.ಗೋವಿಂದ ಗೌಡರಿಗೆ ಮನವಿ ಪತ್ರ ಸಲ್ಲಿಸಿ, ತಮ್ಮಲ್ಲಿಗೆ ಕುಡಿಯುವ ನೀರು, ರಸ್ತೆಗೆ ವಿದ್ಯುದ್ದೀಪ ಹಾಗೂ ಅಂಗನವಾಡಿ ಶಾಲೆ—ಇವುಗಳನ್ನು ಒದಗಿಸಬೇಕೆಂದು ಕೋರಿದ್ದಾರೆ.

ಈ ಸಂಬಂಧ ನಡೆದ ಸಭೆಯಲ್ಲಿ ಪಿ.ಜಿ. ಗುರ್ಜರ್, ಪಿಂಟೋ ಮತ್ತು ಗ್ರಾಮಪಂಚಾಯ್ತಿ ಅಧ್ಯಕ್ಷರು ಮಾತನಾಡಿದರು. ದಾರಿ ದೀಪ ಮತ್ತು ಕುಡಿಯುವ ನೀರಿನ ಬಗ್ಗೆ ಆದಷ್ಟು ಬೇಗ ಕ್ರಮ ತೆಗೆದುಕೊಳ್ಳುವುದಾಗಿ ಶಾಸಕರು ಭರವಸೆ ಕೊಟ್ಟರು. ಅಂಗನವಾಡಿ ಶಾಲೆ ಹಾಗೂ ದೀಪದ ಬಗ್ಗೆ ಎಲ್ಲಾ ಪ್ರಯತ್ನ ಮಾಡುವುದಾಗಿ ಪಂ. ಅಧ್ಯಕ್ಷರು ಭರವಸೆ ಕೊಟ್ಟರು.

ಇದೇ ಸಂದರ್ಭದಲ್ಲಿ ಗ್ರಾಮಸ್ಥರು ತಮ್ಮೂರಿಗೆ "ರಾಘವೇಂದ್ರ ನಗರ" ಎಂದು ನಾಮಕರಣ ಮಾಡಿಕೊಂಡರು.

ಕೆ. ಪಾಂಡುರಂಗ ಮನವಿ ಪತ್ರ ಅರ್ಪಿಸಿ, ವಂದನಾರ್ಪಣೆ ಮಾಡಿದರು.

## ಅಭಿನಂದನಾ ಸಮಾರಂಭ

ಕೊಪ್ಪ: ಫೆ. ೨೩ರಂದು ಸ್ಥಳೀಯ ಚಿಕ್ಕಮಗಳೂರು ಜಿಲ್ಲಾ ಅಡಿಕೆ ಬೆಳೆಗಾರರ ಸಂಘದ ವತಿಯಿಂದ ನೂತನ ಶಾಸಕ ಹೆಚ್.ಜಿ.ಗೋವಿಂದ ಗೌಡರಿಗೆ ಅಭಿನಂದನಾ ಸಮಾರಂಭ ನಡೆಯಿತು. ಸಂಘದ ಅಧ್ಯಕ್ಷ ಪಿ.ಜಿ.ಗುರ್ಜರ್ ಅಧ್ಯಕ್ಷತೆ ವಹಿಸಿದ್ದರು. ವಿಷ್ಣುಮೂರ್ತಿ ಭಟ್ಟ, ಕೋದಂಡರಾಮ ಭಟ್ಟ, ವೆಂಕಟೇಶ ಭಟ್ಟ, ಹನುಮಂತರಾವ್ ಅಭಿನಂದನಾ ಭಾಷಣ ಮಾಡಿದರು. ತಾ॥ ಅ॥ಮಂ॥ ಅಧ್ಯಕ್ಷ ಬಿ.ಜಿ. ಚಿದಂಬರ್ ಉಪಸ್ಥಿತರಿದ್ದರು. ಜೆ. ಎಸ್. ಶ್ರೀಕಂಠ ಸ್ವಾಗತಿಸಿ, ಹೆಚ್. ವಿ. ಸುಬ್ರಾವ್ ವಂದಿಸಿದರು.

## ಜನತಾ ಪಕ್ಷದ ಗ್ರಾಮ ಯೋಜನೆ ಸಮಿತಿ ಆಯ್ಕೆ

ಬಿಲಗದ್ದೆ: ಜನತಾ ಪಕ್ಷದ ಬಿಲಗದ್ದೆ ಗ್ರಾಮದ ಗ್ರಾಮಯೋಜನೆಯ ಕಾರ್ಯಕಾರಿ ಸಮಿತಿ ಸಭೆ ಫೆ.೨೦ರಂದು ತಾ॥ಜನತಾ ಪಕ್ಷದ ನಾಯಕ ಎ.ಬಿ.ವಾಸಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು. ನೂತನ ಕಾರ್ಯಕಾರಿ ಸಮಿತಿಗೆ ಕೆ.ಎಸ್.ರವಿಚಂದ್ರ ಅಧ್ಯಕ್ಷ, ಹೆಚ್. ವಿ. ಶಿವಪ್ಪ ಗೌಡ ಉಪಾಧ್ಯಕ್ಷ, ಹೆಚ್.ಎಸ್.ಪಾಂಡುರಂಗ ಕಾರ್ಯದರ್ಶಿ ಹಾಗೂ ೨೭ ಜನ ಸದಸ್ಯರು ಆಯ್ಕೆಯಾದರು

# "ಜಲ್ಲಿ ತೆಗೆಸಿ ನಮ್ಮ ಮಣ್ಣಿನ ರಸ್ತೆ ಉಳಿಸಿ"

(೩ನೇ ಪುಟದಿಂದ)

ಲ್ಭಾಗದಿಂದ ಬಾಗೋಡು ಮೇಲ್ಭಾಗದವರೆಗೆ (ಸುಮಾರು ೧ ಮೈಲಿ) ಈ ವರ್ಷದ ಚುನಾವಣೆಯ ಗಲಾಟೆಯಲ್ಲಿ 'ಜಲ್ಲಿ' ಹಾಕಿಸಲಾಗಿದೆ. "ಆದರೆ ಜಲ್ಲಿ ಅಂತ 'ಹೊಳೆಗೊಣೆ'ಯನ್ನೂ ಭರ್ತಿ ಸೇರಿಸಿ ಹಾಕಿದ್ದಾರಲ್ಲದೆ, ರೋಣಗಲ್ಲನ್ನು ಕೇವಲ ಒಂದೇ ಸಲ ಮೇಲಿನಿಂದ ಕೆಳಗಿನ ತನಕ ಓಡಿಸಿ ತೆಗೆದುಕೊಂಡು ಹೋಗಿದ್ದಾರೆ" ಎಂಬುದು ಹಳ್ಳಿಗರ ದೂರು.

ಜಲ್ಲಿ ಎಲ್ಲಾ ಕಡೆ ಕಿತ್ತು ಹೋಗಿದ್ದು ವಾಹನ ಸಂಚಾರವಿರಲಿ, ಮನುಷ್ಯರು ನಡೆಯಲೇ ಕಷ್ಟವಾಗಿದೆ. ನಮ್ಮ ಹಳ್ಳಿಗ್ಳಾಡಲ್ಲಿ ಶೇ.೯೯ ಭಾಗ ಶಾಲಾ ಮಕ್ಕಳು ಬರಿಗಾಲಲ್ಲೇ ಓಡಾಡುತ್ತಾರಷ್ಟೆ. ಇಲ್ಲಿ ಅವರಿಗಂತೂ ಚಿತ್ರಹಿಂಸೆಯೇ ಆಗುತ್ತದೆ. ಸೈಕಲ್‌ಗಳಿಗಂತೂ ಕೆಲಸವೇ ಇಲ್ಲವಾಗಿದೆ. ಇದೊಂದು ಮಳೆಗಾಲ ಸಾಕು—ಈ ರಸ್ತೆ ಗರುಡ ಪುರಾಣದಲ್ಲಿ ವರ್ಣಿತವಾದ 'ಯಮಲೋಕದ ರಸ್ತೆ'ಯಾಗಲಿಕ್ಕೆ—ಎಂದು ಜನ ಹೇಳುತ್ತಾರೆ.

ರಸ್ತೆಯ ಏರಿನಲ್ಲಿ ಟಿಲ್ಲರ್‌ಗಳು ಹತ್ತಲಾರದೆ ನಿಂತು, "ಚಡಪಡಿಸುವಾಗ" ಜಲ್ಲಿ ಎಲ್ಲ ಕಿತ್ತು ಹೋಗುವುದರಿಂದ ಹೀಗಾಗಿದೆ ಎಂದು ಕಂಟ್ರಾಕ್ಟರ್ ಕಡೆಯವರು ಹೇಳುತ್ತಾರಂತೆ. ಆದರೆ ಉರಿಬಿಸಿಲಲ್ಲಿ ಒಳದಾರಿ ಬಿಟ್ಟು ಒಂದು ಮೈಲಿ ಸುತ್ತು ದಾರಿಯಲ್ಲಿ ನಡೆದಾಗ ಹಳ್ಳಿಗರ ದೂರು ಪ್ರಾಮಾಣಿಕವಾದದ್ದು ಎಂದು ಕಂಡುಬಂತು.

ಶೃಂಗೇರಿಯ ದೊಡ್ಡ ಕಂಟ್ರಾಕ್ಟರೊಬ್ಬರು ಈ ಕಾಮಗಾರಿ ಮಾಡಿಸಿದ್ದಂತೆ.

ಈಗ ಹಳ್ಳಿಗರ ಕೋರಿಕೆ ಬಹಳ ಸಣ್ಣದು—"ನಮಗೆ ಜಲ್ಲಿಯೂ ಬೇಡ, ಟಾರೂ ಬೇಡ. **ಕಂಟ್ರಾಕ್ಟರ್ ಖರ್ಚಿನಲ್ಲೇ** ಜಲ್ಲಿ ತೆಗೆಸಿ ನಮಗೆ ನಮ್ಮ ಮಣ್ಣಿನ ರಸ್ತೆ ಉಳಿಸಿಕೊಡಿ."

ಲೋಕೋಪಯೋಗಿ ಇಲಾಖೆಯವರು ಹಳ್ಳಿಗರ ಈ ಚಿಕ್ಕ ಕೋರಿಕೆಯನ್ನಾದರೂ ಈಡೇರಿಸಲಿ!

## ಅರಣ್ಯನಾಶ: ಮೂರು ಕೊಟ್ಟ ರಕ್ಷಕರಿಗೆ ಬೆದರಿಕೆ

(ವರದಿ: ಕುಮನಾ)

ಕಟ್ಟೆಮನೆ: ಹರಾವರಿ ಗ್ರಾಮದ ಸ. ನಂ. ೭೧ರಲ್ಲಿ ಅರಣ್ಯದ ಅತಿಕ್ರಮ ಪ್ರವೇಶ ಹಾಗೂ ಸುಮಾರು ೪ ಸಾವಿರ ರೂ. ಬೆಲೆಯ ಹೆಬ್ಬಲಸು ಮತ್ತಿತರ ಮರಮುಟ್ಟುಗಳಿಗೆ ಬೆಂಕಿ ಕೊಟ್ಟು ನಾಶ ಮಾಡಿರುವ ಪ್ರಕರಣ ಈಚೆಗೆ ನಡೆದಿದೆ.

ಸದರಿ ಸ. ನಂ.ಗೆ ದರ್ಖಾಸ್ತು ಕೊಟ್ಟಿರುವವನೆಂದೂ ಈ ಘಟನೆಗೆ ಕಾರಣನೆಂದೂ ಹೇಳಲಾಗಿರುವ ಜೋಗಿಮಕ್ಕಿಯ ರಘು ಶೆಟ್ಟಿ ಎಂಬಾತ, ಈಬಗ್ಗೆ ಸ್ಥಳೀಯ ಅರಣ್ಯ ರಕ್ಷಕರು ವಿಭಾಗ ಅರಣ್ಯಾಧಿಕಾರಿಗಳಿಗೆ ಸೂಕ್ತ ದೂರು ಸಲ್ಲಿಸಿದ್ದಕ್ಕಾಗಿ ಅವರಿಗೆ ಶಾಸಕ ಗೋವಿಂದೇಗೌಡರಿಗೆ ಹೇಳಿ ಸಸ್ಪೆಂಡ್ ಮಾಡಿಸುವ ಬೆದರಿಕೆ ಹಾಕಿದ್ದಾನೆಂದು ಗೊತ್ತಾಗಿದೆ.

ಹಳ್ಳಿಗಳಲ್ಲಿ ಶಾಸಕರ ಹೆಸರನ್ನು ಹೀಗೆ ಯಾರ್ಯಾರೋ ದುರುಪಯೋಗ ಮಾಡುತ್ತಿರುವ ಬಗ್ಗೆ ಶಾಸಕರು ನಿಗಾ ವಹಿಸಬೇಕೆಂದು ಗ್ರಾಮಸ್ಥರು ಮಾತಾಡಿಕೊಳ್ಳುತ್ತಿದ್ದಾರೆ.

## ವಾರ್ಷಿಕೋತ್ಸವಗಳು

### ಬಾಳಗಡಿ ಶಾಲೆ

ಕೊಪ್ಪ ಬಾಳಗಡಿಯ ಮಾದರಿ ಹಿ. ಪ್ರಾ. ಶಾಲೆಯ ವಾರ್ಷಿಕೋತ್ಸವ ಹೊಸ ರಂಗಮಂದಿರದಲ್ಲಿ ಫೆ. ೧೭ರಂದು ತಾ. ಅ. ಮಂ. ಸದಸ್ಯ ಬಿ.ಆರ್.ಪರಮೇಶ್ವರ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಶಾಲಾ ತನಿಖಾಧಿಕಾರಿ ಎ. ಆರ್. ಶ್ರೀನಿವಾಸ್ ಮುಖ್ಯ ಅತಿಥಿಗಳಾಗಿದ್ದು, ಶ್ರೀಮತಿ ಚಂದ್ರಾ ಬಾಲಣ್ಣ ಗೌಡ ಬಹುಮಾನ ಹಂಚಿದರು. ಮುಖ್ಯೋಪಾಧ್ಯಾಯ ಎಂ.ಎಸ್. ಲಕ್ಷ್ಮೀನಾರಾಯಣ ಸ್ವಾಗತಿಸಿ, ಸಿದ್ಧರಾಮಕ್ಕ ವರದಿ ಓದಿದರು. ಎಸ್. ವಿ. ವೆಂಕಟೇಶಮೂರ್ತಿ ವಂದಿಸಿದರು. ಮಕ್ಕಳಿಂದ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು.

### ವಿದ್ಯಾ ಮಹಿಳಾ ಸಮಾಜ

ಬಾಳಗಡಿಯ ವಿದ್ಯಾ ಮಹಿಳಾ ಸಮಾಜದ ವಾರ್ಷಿಕೋತ್ಸವ ಫೆ. ೧೮ರಂದು ಬಿ. ಆರ್. ಪರಮೇಶ್ವರ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ತಾ.ಅ.ಮಂ. ಉಪಾಧ್ಯಕ್ಷೆ ಸುಮಿತ್ರಮ್ಮ ಬಹುಮಾನ ಹಂಚಿದರು. ಬಾಲ ವಿಕಾಸ ಯೋಜನಾಧಿಕಾರಿ ಕೆ.ಟಿ. ಬೋರಯ್ಯ ಮುಖ್ಯ ಅತಿಥಿಗಳಾಗಿದ್ದರು. ಶ್ರೀಮತಿ ಚಂದ್ರಾ ಬಾಲಣ್ಣ ಗೌಡ ಸ್ವಾಗತಿಸಿ, ಕಾರ್ಯದರ್ಶಿನಿ ವಂದಿಸಿದರು. ನಾಟಕ ಪ್ರದರ್ಶನ ನಡೆಯಿತು.

## ಒಂದು ಸ್ಪಷ್ಟನೆ

"ಹಂದಿ – ನಾಯಿಗಳು ಕಾದುಕೊಂಡ ಹಾಗೆ" ಎಂಬುದು ಮಲೆನಾಡಿನ ಈ ಭಾಗದ ಒಂದು ಪ್ರಸಿದ್ಧ ರೂಢಿ ಮಾತು. ಅಂದರೆ, ಹೊಡೆದಾಡಿ ಕೊಳ್ಳದಿದ್ದರೂ, ಕ್ಷುಲ್ಲಕ ವಿಷಯಗಳಿಗಾಗಿ ಇಡೀ ದಿನ, ಯಾವತ್ತೂ ಜಗಳಾಡುತ್ತಿರುವುದಕ್ಕೆ ಹೀಗೆ ಹೇಳುತ್ತಾರೆ.

೨೦-೨-೮೪ರ 'ಮುಂಜಾವು' ೨ನೇ ಪುಟದ 'ಕೊಪ್ಪದಲ್ಲಿ ಬರ: ನೀರಿಗೆ' ಎಂಬ ವರದಿಯಲ್ಲಿ ಈ ಗಾದೆ ಬಳಸಿರುವ ಬಗ್ಗೆ ಹಲವರು ಅಸಮಾಧಾನ ವ್ಯಕ್ತಪಡಿಸಿದ್ದಾಗಿ ತಿಳಿದು ಬಂತು. 'ಜನರನ್ನು ಹಂದಿ–ನಾಯಿಗಳಿಗೆಲ್ಲ ಹೋಲಿಸಿದ್ದಾರೆ' ಎಂದು ಆಕ್ಷೇಪಿಸಿದ ವಿಷಯ ತಿಳಿಯಿತು. ನಲ್ಲಿಯಲ್ಲಿ ನೀರು ಬರಲು ಶುರುವಾದೊಡನೆ ಒಂದಲ್ಲೊಂದು ಕಡೆ, ಯಾವುದಾದರೂ ನೆಪಕ್ಕೆ, ಯಾರ್ಯಾರ ಮಧ್ಯೆಯಾದರೂ ಜಗಳ ಶುರುವಾದರೆ, ನೀರು ನಿಂತರೂ ಅದು ನಿಂತಿರುವುದಿಲ್ಲ. ಹಾಗೆಂದು ಯಾರು ಯಾರಿಗೂ ಏನೂ ಮಾಡುವುದಿಲ್ಲ.

ಮೇಲಿನದು ಗಾದೆ ಎಂದು ಅರ್ಥಮಾಡಿಕೊಂಡರೆ ಇಂಥ ಜಗಳಕ್ಕೆ ಇನ್ನೇನು ಹೇಳುತ್ತೀರಿ? ಇದು ಜನರನ್ನು ಪ್ರಾಣಿಗಳಿಗೆ ಹೋಲಿಸಿದಂತಾಯಿತೆ?

ಮನುಷ್ಯರಿಗೆ, ಮನುಷ್ಯತ್ವಕ್ಕೆ ನಾನು ಎಲ್ಲಕ್ಕಿಂತ ಹೆಚ್ಚು ಗೌರವ, ಬೆಲೆ ಕೊಡುತ್ತೇನೆ; ಅದನ್ನು ಅವಮಾನಿಸುವುದನ್ನು ನಿಮ್ಮಂತೆ ನಾನೂ ಸಹಿಸುವುದಿಲ್ಲ.

—ಸಂಪಾದಕ.

### ಕೃತಜ್ಞತೆಗಳು

ಶ್ರೀ ಕಮಂಡಲ ಗಣಪತಿ ದೇವಸ್ಥಾನದ ಸಹಾಯಾರ್ಥವಾಗಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಯಕ್ಷಗಾನ ಮಂಡಳಿಯ ಕೊಪ್ಪದ ಆಟದಲ್ಲಿ ಧನಸಂಗ್ರಹಣೆಯಲ್ಲೂ ಇತರ ವಿಧದಲ್ಲೂ ಸಹಕರಿಸಿದ ಎಲ್ಲಾ ಕಾರ್ಯಕರ್ತರಿಗೂ ದಾನಿಗಳಿಗೂ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ಈ ಮೂಲಕ ಕೃತಜ್ಞತೆಗಳನ್ನು ಅರ್ಪಿಸುತ್ತ ಶ್ರೀ ಗಣಪತಿಯು ತಮ್ಮೆಲ್ಲರನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

**ಧರ್ಮದರ್ಶಿ ಮಂಡಳಿ**

**ಶ್ರೀ ಕಮಂಡಲ ಕ್ಷೇತ್ರ, ಕೆಸನೆ.**

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
**ಸಿರಿಮನೆ ನಾಗರಾಜ್.**
ಅಚ್ಚು: ದೀಪವಟಿಗೆ ಅಚ್ಚುಕೂಟ, ಕೊಪ್ಪ